# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 519 |
| ಸದಸ್ಯರ ಹೆಸರು | : | ಶ್ರೀ ಮುನಿರಾಜು ಗೌಡ ಪಿ.ಎಂ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 21-02-2022 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕನ್ನಡ ಭಾಷೆಗೆ ಶಾಸ್ತ್ರೀಯ ಸ್ಥಾನಮಾನವನ್ನು ಯಾವಾಗ ನೀಡಲಾಗಿದೆ; | ಕನ್ನಡ ಭಾಷೆಗೆ ಶಾಸ್ತ್ರೀಯ ಸ್ಥಾನಮಾನವನ್ನು 2008ರಲ್ಲಿ ನೀಡಲಾಗಿದೆ. |
| ಆ) | ಶಾಸ್ತ್ರೀಯ ಸ್ಥಾನಮಾನ ನೀಡಲಾದ ನಂತರ ಶಾಸ್ತ್ರೀಯ ಕನ್ನಡ ಅತ್ಯುನ್ನತ ಅಧ್ಯಯನ ಕೇಂದ್ರವನ್ನು ಎಲ್ಲಿ ಯಾವಾಗ ಪ್ರಾರಂಭಿಸಲಾಗಿದೆ; | • ಶಾಸ್ತ್ರೀಯ ಕನ್ನಡ ಅಧ್ಯಯನ ಕೇಂದ್ರವು (CESCK) 2015 ರಲ್ಲಿ, ಮೊದಲಿಗೆ ಸಿ.ಐ.ಐ.ಎಲ್, ಪ್ರಧಾನ ಕಛೇರಿಯ ಆವರಣದಲ್ಲಿರುವ ಕಟ್ಟಡದಲ್ಲಿ ಕಾರ್ಯಾರಂಭ ಮಾಡಿತು.<br>• ನಂತರ, 2019ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಅದಕ್ಕೆ ಟೈಪ್-ವಿ ಕಟ್ಟಡವನ್ನು ನಿಗಧಿಪಡಿಸಿತು.<br>• ತಾತ್ಕಾಲಿಕವಾಗಿ ಪ್ರಸ್ತುತ ಕನ್ನಡ ಶಾಸ್ತ್ರೀಯ ಅಧ್ಯಯನ ಕೇಂದ್ರವು ಮಾನಸ ಗಂಗೋತ್ರಿಯ ಆವರಣದಲ್ಲಿ ಎನ್.ಸಿ.ಹೆಚ್.ಎಸ್.ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದೆ. |
| ಇ) | ಹಾಲಿ ಇರುವ ಶಾಸ್ತ್ರೀಯ ಕನ್ನಡ ಅತ್ಯುನ್ನತ ಅಧ್ಯಯನ ಕೇಂದ್ರಕ್ಕೆ ಸ್ವಾಯತ್ತತೆ ನೀಡಲಾಗಿದೆಯೇ; ಇಲ್ಲದಿದ್ದಲ್ಲಿ ಸ್ವಾಯತ್ತತೆ ವಿಳಂಬವಾಗಲು ಕಾರಣಗಳೇನು; | • ಶಾಸ್ತ್ರೀಯ ಕನ್ನಡ ಅತ್ಯುನ್ನತ ಅಧ್ಯಯನ ಕೇಂದ್ರಕ್ಕೆ ಸ್ವಾಯತ್ತತೆಯನ್ನು ನೀಡಲಾಗಿರುವುದಿಲ್ಲ.<br>• ಸ್ವಾಯತ್ತತೆಯನ್ನು ಪಡೆಯಬೇಕಾದರೆ, ಅದರದೇ ಆದ ಸ್ಥಳಾವಕಾಶ ಮತ್ತು ಸ್ವಂತ ಕಟ್ಟಡವನ್ನು ಹೊಂದಿರಬೇಕಾಗಿದ್ದು, ಸದರಿ ಅಧ್ಯಯನ ಕೇಂದ್ರವು ಸ್ವಂತ ಕಟ್ಟಡವನ್ನು ಹೊಂದಿರದ ಕಾರಣ ಸ್ವಾಯತ್ತತೆ ನೀಡುವುದು ವಿಳಂಬವಾಗಿರುತ್ತದೆ. |
| ಈ) | ಸ್ವಾಯತ್ತತೆ ನೀಡದೆ ಹಾಲಿ ಇರುವ ಕೇಂದ್ರವು ಇನ್ನು ಕೇಂದ್ರ ಸರ್ಕಾರದ ಸುಪರ್ದಿಯಲ್ಲಿಯೇ ನಡೆಯುತ್ತಿದ್ದಲ್ಲಿ ಸ್ವಾಯತ್ತ ಅಧ್ಯಯನ ಕೇಂದ್ರಗಳಿಗೆ ಲಭ್ಯವಾಗುವ ಪ್ರತ್ಯೇಕ ಅನುದಾನ ದೊರೆಯುತ್ತಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |

| | | |
|---|---|---|
| ಉ) | ಹಾಗಿದ್ದಲ್ಲಿ ಕನ್ನಡ ಶಾಸ್ತ್ರೀಯ ಅಧ್ಯಯನ ಕೇಂದ್ರಕ್ಕೆ ಸ್ವಾಯತ್ತತೆ ಪಡೆದುಕೊಳ್ಳಲು ಸರ್ಕಾರವು ಏನು ಕ್ರಮಗಳನ್ನು ಕೈಗೊಳ್ಳುತ್ತಿದೆ? | • ಶಾಸ್ತ್ರೀಯ ಕನ್ನಡ ಅಧ್ಯಯನ ಕೇಂದ್ರಕ್ಕೆ ಅನುದಾನ ನೀಡುವಂತೆ ಹಾಗೂ ಎಂ.ಒ.ಯು ಗೆ ಅನುಮತಿ ಕೋರಿ ದಿನಾಂಕ:02.06.2020ರಂದು ಸಿ.ಐ.ಐ.ಎಲ್ ನ ನಿರ್ದೇಶಕರು, ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಹಾಗೂ ಅಭಿವೃದ್ಧಿ ಸಚಿವಾಲಯಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.<br>• ಈ ಹಿಂದಿನ ಮಾನ್ಯ ಇಲಾಖಾ ಸಚಿವರಾದ ಶ್ರೀಸಿ.ಟಿ.ರವಿ ರವರು ಶಾಸ್ತ್ರೀಯ ಕನ್ನಡ ಅಧ್ಯಯನ ಕೇಂದ್ರಕ್ಕೆ ಅನುದಾನ ನೀಡುವಂತೆ ದಿನಾಂಕ:08.06.2020ರಂದು ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಹಾಗೂ ಅಭಿವೃದ್ಧಿ ಸಚಿವಾಲಯಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. |

ಸಂಖ್ಯೆ: ಕಸಂವಾ 10 ಕವಿಸ 2022.

(ವಿ.ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು